# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 576
2. ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸುವ ದಿನಾಂಕ : 24.09.2020
4. ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಡ್ರಗ್ಸ್ ಮಾರಾಟ ದಂಧೆ ವ್ಯಾಪಕವಾಗಿ ನಡೆಯುತ್ತಿದ್ದು, ಯುವ ಪೀಳಿಗೆ ಇದರ ಜಾಲಕ್ಕೆ ಬಿದ್ದು, ಜೀವನ ಹಾಳುಮಾಡಿಕೊಳ್ಳುತ್ತಿರುವುದನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೆ; | ರಾಜ್ಯದಲ್ಲಿ ಡ್ರಗ್ಸ್ ಪ್ರಕರಣಗಳು ವರದಿಯಾಗುತ್ತಿರುವುದನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿರುತ್ತದೆ. |
| ಆ | ಸದರಿ ಮಾದಕ ವಸ್ತು ಮಾರಾಟ ದಂಧೆಯನ್ನುಪರಿಣಾಮಕಾರಿಯಾಗಿ ಹತ್ತಿಕ್ಕಲು ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ; | ಮಾದಕ ವಸ್ತುಗಳ ಮಾರಾಟ, ಸೇವನೆ ಹಾಗೂ ಸಾಗಾಣಿಯನ್ನು ತಡೆಗಟ್ಟಲು ಕೈಗೊಂಡಿರುವ ಕ್ರಮಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಇ | ಕಳೆದ 02 ವರ್ಷಗಳಲ್ಲಿ ರಾಜ್ಯದಲ್ಲಿ ಮಾದಕ ವಸ್ತು ಮಾರಾಟ ಮಾಡುತ್ತಿರುವ ಎಷ್ಟು ಮಂದಿಯನ್ನು ಬಂಧಿಸಲಾಗಿದೆ; ಎಷ್ಟು ಮಂದಿಯನ್ನು ಕಾನೂನಿನಡಿ ಶಿಕ್ಷೆಗೆ ಒಳಪಡಿಸಲಾಗಿದೆ; | ಕಳೆದ ಎರಡು ವರ್ಷಗಳಲ್ಲಿ ರಾಜ್ಯದಲ್ಲಿ ಮಾದಕ ವಸ್ತು ಮಾರಾಟ ಮಾಡುತ್ತಿರುವ ಎಷ್ಟು ಮಂದಿಯನ್ನು ಬಂಧಿಸಲಾಗಿದೆ, ಎಷ್ಟು ಮಂದಿಯನ್ನು ಕಾನೂನಿನಡಿ ಶಿಕ್ಷೆಗೆ ಒಳಪಡಿಸಲಾಗಿದೆ ಎಂಬ ಮಾಹಿತಿ ಈ ಕೆಳಕಂಡಂತಿದೆ. |

| ವರ್ಷ | ದಾಖಲಾದ ಪ್ರಕರಣಗಳ ಸಂಖ್ಯೆ | ಬಂಧಿಸಿದ ಆರೋಪಿಗಳ ಸಂಖ್ಯೆ | ನ್ಯಾಯಾಲಯದಲ್ಲಿ ಶಿಕ್ಷೆಯಾದ ಪ್ರಕರಣಗಳ ಸಂಖ್ಯೆ | ನ್ಯಾಯಾಲಯದಿಂದ ಶಿಕ್ಷೆಗೊಳಗಾದ ಅಪರಾಧಿಗಳ ಸಂಖ್ಯೆ |
|---|---|---|---|---|
| 2018 | 1032 | 1470 | 167 | 227 |
| 2019 | 1661 | 2263 | 254 | 375 |
| 2020 (ಸೆಪ್ಟಂಬರ್ 15 ವರೆಗೆ) | 2589 | 2865 | 83 | 179 |

| | | |
|---|---|---|
| ಈ | ತಿಂಗಳುಗಟ್ಟಲೇ ನಿಗಾ ವಹಿಸಿ ಡ್ರಗ್ ಪೆಡ್ಲರ್‌ನ್ನು ಬಂಧಿಸಿ ನ್ಯಾಯಾಂಗ ಬಂಧನಕ್ಕೆ ಒಳಪಡಿಸಿದರೆ ಆರೋಪಿ ವಾರದೊಳಗೆ ಜಾಮೀನಿನ ಮೇಲೆ ಹೊರಗೆ ಬರಲು ಕಾರಣವೇನು; | ಎನ್‌ಡಿಪಿಎಸ್ ಪ್ರಕರಣಗಳು ಜಾಮೀನು ರಹಿತ ಪ್ರಕರಣಗಳಾಗಿದ್ದು, ಕೂಡಲೇ ಜಾಮೀನು ದೊರೆಯುವುದಿಲ್ಲ. ಆರೋಪಿತರನ್ನು ನ್ಯಾಯಾಲಯಕ್ಕೆ ಹಾಜರುಪಡಿಸಲಾಗುತ್ತಿದ್ದು, ಮಾನ್ಯ ನ್ಯಾಯಾಲಯವು ನ್ಯಾಯಂಗ ಬಂಧನಕ್ಕೊಳಪಡಿಸುತ್ತದೆ. ತದನಂತರ ಜಾಮೀನು ನೀಡುವಿಕೆ ವಿಷಯದಲ್ಲಿ ನ್ಯಾಯಾಲಯವು ವಿವೇಚನಾಧಿಕಾರವನ್ನು ಹೊಂದಿರುತ್ತದೆ. |
| ಉ | ಮಾದಕ ವಸ್ತು ಪ್ರಕರಣಗಳಲ್ಲಿ ತ್ವರಿತ ವಿಚಾರಣೆ ನಡೆಸಿ ಆರೋಪಿಗಳಿಗೆ ಕಠಿಣ ಶಿಕ್ಷೆ ವಿಧಿಸುವಂತೆ ಮಾಡಲು ನ್ಯಾಯಾಲಯಗಳಿಗೆ ಮನವಿ ಮಾಡುವ ಯೋಚನೆ ಸರ್ಕಾರಕ್ಕಿದೆಯೇ? | ಮಾದಕ ದ್ರವ್ಯ ಸಾಗಾಣೆ, ಬಳಕೆ ಮತ್ತು ಮಾರಾಟ ಪ್ರಕರಣಗಳಿಗೆ ಸಂಬಂಧಿಸಿದಂತೆ, ಪ್ರಸ್ತುತ ಜಾರಿಯಲ್ಲಿರುವ ಎನ್‌ಡಿಪಿಎಸ್ ಕಾಯ್ದೆ 1985 ರ ನಿಬಂಧನೆಗಳು ಕಠಿಣವಾಗಿರುತ್ತವೆ. ಪ್ರಸ್ತುತ ಎನ್‌ಡಿಪಿಎಸ್ ಪಿಐಟಿ ಕಾಯ್ದೆ-1988 ರ ನಿಬಂಧನೆಗಳನ್ವಯ ರೂಡಿಗತ ಅಪರಾಧಿಗಳನ್ನು ಪ್ರತಿಬಂಧನಾತ್ಮಕ ದಸ್ತಗಿರಿ ಮಾಡಲಾಗುತ್ತದೆ ಹಾಗೂ ಕೆಲವು ಪ್ರಕರಣಗಳಲ್ಲಿ ಗೂಂಡಾಕಾಯ್ದೆಯನ್ನು ಸಹ ಅಳವಡಿಸಿಕೊಳ್ಳಲಾಗಿರುತ್ತದೆ. |

ಒಇ 20 ಪಿಎನ್‌ಡಿ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

## ಅನುಬಂಧ

**ರಾಜ್ಯದಲ್ಲಿ ಮಾದಕ ಪದಾರ್ಥಗಳ ಮಾರಾಟ, ಸಾಗಣೆ ಮತ್ತು ಸೇವನೆಯನ್ನು ತಡೆಗಟ್ಟಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಸಹ ಕೈಗೊಂಡಿರುತ್ತದೆ.**

1. ರಾಜ್ಯದಲ್ಲಿ ಮಾದಕ ಪದಾರ್ಥಗಳ ವಿರುದ್ಧ ಹೆಚ್ಚು ಹೆಚ್ಚು ಪ್ರಕರಣಗಳನ್ನು ದಾಖಲಿಸಿ ಸಂಬಂಧಿಸಿದವರ ಮೇಲೆ ಎನ್.ಡಿ.ಪಿ.ಎಸ್ ಕಾಯ್ದೆ ಅನ್ವಯ ಕ್ರಮ ಕೈಗೊಳ್ಳಲಾಗುತ್ತಿದೆ.
2. ವಿದ್ಯಾರ್ಥಿಗಳು ಮತ್ತು ಯುವ ಸಮೂಹವು ಮಾದಕ ವಸ್ತುಗಳ ದುಷ್ಪಟಕ್ಕೆ ಬಲಿಯಾಗದಂತೆ ಶಾಲಾ ಕಾಲೇಜುಗಳ ಬಳಿ ಗಸ್ತು ವಾಹನಗಳಿಂದ ವಿಶೇಷವಾಗಿ ಗಸ್ತು ನಡೆಸಿ ಸ್ಥಳೀಯ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳು ಆಯಾ ಶಾಖೆಗಳಿಗೆ ಹೋಗಿ ಮಾದಕ ವಸ್ತುಗಳ ದುಷ್ಪರಿಣಾಮದ ಬಗ್ಗೆ ಅರಿವು ಮೂಡಿಸಲಾಗುತ್ತಿದೆ ಹಾಗೂ ಮಾದಕ ವಸ್ತು ಸಾಗಣೆ ಹಾಗೂ ಮಾರಾಟ ಮಾಡುವವರ ವಿರುದ್ಧ ನಿಗಾ ವಹಿಸಲಾಗುತ್ತಿದೆ.
3. ಸರ್ಕಾರದ ಆದೇಶ ಸಂಖ್ಯೆ: ಒಇ 16 ಪಿಎನ್‌ಡಿ 2018, ದಿನಾಂಕ: 27.08.2018 ರನ್ವಯ ಶಾಲಾ ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹಂತದಲ್ಲಿ ಮಾದಕ ವಸ್ತುಗಳ ಬಳಕೆ ಮತ್ತು ಸಾಗಣೆ ತಡೆಗಟ್ಟಲು ವಿವಿಧ ಇಲಾಖೆಗಳ ಅಧಿಕಾರಿಗಳನ್ನೊಳಗೊಂಡಂತೆ ಸಮಿತಿಯನ್ನು ರಚಿಸಿ ಕರ್ತವ್ಯ ನಿಗಧಿಪಡಿಸಲಾಗಿದೆ.
4. ಜನ ಸಾಮಾನ್ಯರಲ್ಲಿ ಮಾದಕ ವಸ್ತುಗಳ ವಿರುದ್ಧ ಅರಿವು ಮೂಡಿಸುವ ಸಲುವಾಗಿ ಬಿತ್ತಿ ಪತ್ರಗಳನ್ನು, ಸಿನಿಮಾ ಮಂದಿರಗಳಲ್ಲಿ ಸ್ಲೈಡ್ ಶೋ, ಸುದ್ದಿ ಮಾಧ್ಯಮಗಳಲ್ಲಿ ಮಾದಕ ವಸ್ತುಗಳ ಬಳಕೆ ವಿರುದ್ಧ ಸಂದೇಶಗಳನ್ನು ಪ್ರಕಟಿಸುವುದು, ಹೀಗೆ ಜನಸಾಮಾನ್ಯರಲ್ಲಿ ಅರಿವು ಮೂಡಿಸಲಾಗುತ್ತಿದೆ.
5. 2015ನೇ ಸಾಲಿನಲ್ಲಿ ಒಬ್ಬ ಅಪರಾಧಿ, 2018 ರಲ್ಲಿ ಮೂವರು ಅಪರಾಧಿಗಳ ಮೇಲೆ ಮಾದಕ ವಸ್ತುಗಳ ಬಳಕೆ ಹಾಗೂ ಸಾಗಾಣಿಕೆ ಪ್ರಕರಣಗಳಲ್ಲಿ ಎನ್.ಡಿ.ಪಿ.ಎಸ್. ಕಾಯ್ದೆಯ ಜೊತೆಗೆ ಗೂಂಡಾ ಕಾಯ್ದೆಯನ್ನು ಚಲಾಯಿಸಿ ಕ್ರಮ ಕೈಗೊಳ್ಳಲಾಗಿದೆ.
6. ವಿಶ್ವ ಸಂಸ್ಥೆಯ ನಿರ್ದೇಶನದನ್ವಯ ಪ್ರತಿ ವರ್ಷ ಆಗಸ್ಟ್ ಮತ್ತು ಸೆಪ್ಟೆಂಬರ್ ಮಾಹೆಯಲ್ಲಿ ಮಾದಕ ವಸ್ತುಗಳ ಮಾರಾಟ ಮತ್ತು ಸಾಗಣೆಯನ್ನು ತಡೆಗಟ್ಟಲು ರಾಜ್ಯಾದ್ಯಂತ ವಿಶೇಷ ಕಾರ್ಯಚರಣೆ ಕೈಗೊಳ್ಳಲಾಗುತ್ತಿದೆ. ಈ ಅವಧಿಯಲ್ಲಿ ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಮಾದಕ ವಸ್ತುಗಳ ಸೇವನೆಯಿಂದಾಗುವ ದೈಹಿಕ/ ಆರ್ಥಿಕ/ ಸಾಮಾಜಿಕ ದುಷ್ಪರಿಣಾಮಗಳ ಕುರಿತು ವಿಶೇಷ ಜಾಗೃತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ.
7. ಘನ ಸರ್ವೋಚ್ಚ ನ್ಯಾಯಾಲಯದ ಅಪರಾಧಿಕ ಮೇಲ್ಮನವಿ ಸಂಖ್ಯೆ: 652/2012ರಲ್ಲಿ ದಿನಾಂಕ 28/01/2016 ರ ಆದೇಶದನ್ವಯ ಡಿಜಿ ಮತ್ತು ಐಜಿಪಿರವರ ಕಛೇರಿ ಸಂಖ್ಯೆ: ಅಪರಾಧ-6/29/ಎಸ್.ಎಂ.ಎಸ್/2016, ದಿನಾಂಕ: 25/04/2016 ರಲ್ಲಿ ಮಾದಕ ವಸ್ತುಗಳ ಜಪ್ತಿ, ಸಂಗ್ರಹಣೆ ಮತ್ತು ವಿಲೇವಾರಿ ಕುರಿತು ಕೈಗೊಳ್ಳಬೇಕಾದ ಕ್ರಮಗಳ ವಿವರಗಳನ್ನು ಎಲ್ಲಾ ಘಟಕಾಧಿಕಾರಿಗಳಿಗೆ ನೀಡಲಾಗಿದೆ.
8. ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್.ಡಿ. 01 ಪಿಎನ್‌ಡಿ 2019, ದಿನಾಂಕ: 30/01/2020 ರಲ್ಲಿ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಮತ್ತು ವಲಯ ಪೊಲೀಸ್ ಮಹಾ ನಿರೀಕ್ಷಕರುಗಳಿಗೆ ಪಿ.ಐ.ಟಿ. ಎನ್.ಡಿ.ಪಿ.ಎಸ್. ಕಾಯ್ದೆ, 1988ರ ಕಲಂ 3(1)ರಡಿಯಲ್ಲಿ ಮುಂಜಾಗ್ರತ ಕ್ರಮವಾಗಿ ರೂಢಿಗತ ಅಪರಾಧಿಗಳನ್ನು ಬಂಧಿಸಲು ಅಧಿಕಾರ ನೀಡಲಾಗಿದೆ.

****